# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1728
ಸದಸ್ಯರ ಹೆಸರು : ಶ್ರೀ ಸಿ.ಎನ್. ಮಂಜೇಗೌಡ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)
ಉತ್ತರಿಸಬೇಕಾದ ದಿನಾಂಕ : 14-03-2022
ಉತ್ತರಿಸುವ ಸಚಿವರು : ಮಾನ್ಯ ಇಂಧನ ಹಾಗೂ ಕನ್ನಡ ಮತ್ತು ಸಂಸ್ಕೃತಿ ಸಚಿವರು

***

| | ಪ್ರಶ್ನೆ | ಉತ್ತರ |
|---|---|---|
| ಅ) | ಕಳೆದ ಎರಡು ವರ್ಷಗಳಲ್ಲಿ ರಾಜ್ಯದ ರೈತರು ತಮ್ಮ ಜಮೀನುಗಳಲ್ಲಿರುವ ಕೊಳವೆ ಬಾವಿಗಳಿಗೆ ಪ್ರತ್ಯೇಕ ವಿದ್ಯುತ್ ಟ್ರಾನ್ಸ್‌ಫಾರ್ಮರ್‌ಗಳನ್ನು ಅಳವಡಿಸಿಕೊಳ್ಳುವ ಸಲುವಾಗಿ ಎಷ್ಟು ಜನ ರೈತರು ಅರ್ಜಿ ಸಲ್ಲಿಸಿ ಹಣ ಪಾವತಿ ಮಾಡಿದ್ದಾರೆ; (ಜಿಲ್ಲಾವಾರು ಮಾಹಿತಿ ನೀಡುವುದು) | ರಾಜ್ಯದಲ್ಲಿ ರೈತರು ಪಂಪ್ ಸೆಟ್ ಗಳ ವಿದ್ಯುತ್ ಸಂಪರ್ಕಕ್ಕಾಗಿ ಅರ್ಜಿ ಸಲ್ಲಿಸಿದಾಗ ಹಾಲಿ ಇರುವ ಪರಿವರ್ತಕದ ತಾಂತ್ರಿಕ ಕಾರ್ಯ ಸಾಧ್ಯತೆಯನ್ನು ಪರಿಗಣಿಸಿ ವಿದ್ಯುತ್ ಸಂಪರ್ಕ ನೀಡಲಾಗುತ್ತಿದೆ. ಹಾಲಿ ಇರುವ ಪರಿವರ್ತಕದ ಹೊರೆ ಅಧಿಕವಿದ್ದಲ್ಲಿ, ತಾಂತ್ರಿಕ ಸಾಧ್ಯತೆಯ ವರದಿಯನ್ನು ಆಧರಿಸಿ ಹೆಚ್ಚುವರಿ ಪರಿವರ್ತಕಗಳನ್ನು ಅಳವಡಿಸಲಾಗುತ್ತಿದೆ.<br><br>ರಾಜ್ಯದಲ್ಲಿನ ರೈತರ ನೀರಾವರಿ ಪಂಪ್‌ಸೆಟ್‌ಗಳಿಗೆ ವಿದ್ಯುತ್ ಸಂಪರ್ಕ ಕಲ್ಪಿಸುವ ಕುರಿತು ಸರ್ಕಾರಿ ಸುತ್ತೋಲೆ ಸಂಖ್ಯೆ ಇಎನ್/41/ ವಿಎಸ್‌ಸಿ/2014 ದಿನಾಂಕ 14-07-2014 ರ ಸರ್ಕಾರದ ಆದೇಶದ ಪ್ರಕಾರ ಅಕ್ರಮ-ಸಕ್ರಮ ಹಾಗೂ ಹೊಸದಾಗಿ ನೋಂದಾಯಿಸಲ್ಪಡುವ ಅರ್ಜಿಗಳು ಎಂಬ ಬೇಧವಿಲ್ಲದೆ ನೋಂದಾಯಿಸಲ್ಪಡುವ ನೀರಾವರಿ ಪಂಪ್‌ಸೆಟ್‌ಗಳಿಗೆ ವಿದ್ಯುತ್ ಸಂಪರ್ಕ ಕಲ್ಪಿಸಲು ಮೂಲಭೂತ ಸೌಕರ್ಯ ಶುಲ್ಕ ರೂ.10,000/- ಗಳ ಜೊತೆಗೆ ಠೇವಣಿ ಹಣವನ್ನು ಪಾವತಿಸಿದ ರೈತರ ಜಮೀನಿನ ಸ್ಥಳ ಪರಿಶೀಲನೆ ಮಾಡಿದ ನಂತರ ಪಂಪ್ ಸೆಟ್‌ಗಳ ಹತ್ತಿರವಿರುವ ವಿದ್ಯುತ್ ಮಾರ್ಗದ ಲಭ್ಯತೆ ಮತ್ತು ಪರಿವರ್ತಕದ ಹಾಲಿ ಇರುವ ಹೊರೆಯನ್ನು ಪರಿಶೀಲಿಸಿ ತಾಂತ್ರಿಕ ಸಾಧ್ಯತೆಗನುಗುಣವಾಗಿ ಸರ್ವೀಸ್ ಮೈನ್ ಮೂಲಕ ವಿದ್ಯುತ್ ಸಂಪರ್ಕ ಕಲ್ಪಿಸಲಾಗುವುದು. ಎಲ್.ಟಿ. ಮಾರ್ಗ ವಿಸ್ತರಣೆ / ಅವಶ್ಯಕತೆ ಇರುವಲ್ಲಿ ಪರಿವರ್ತಕಗಳನ್ನು ಅಳವಡಿಸಿ ಜೇಷ್ಠತಾ ಪಟ್ಟಿಯನುಸಾರ ವಿದ್ಯುತ್ ಸಂಪರ್ಕ ಕಲ್ಪಿಸಲಾಗುತ್ತಿದೆ. ರೈತರ ಕೃಷಿ ಪಂಪ್‌ಸೆಟ್‌ಗಳಿಗೆ ಅವಶ್ಯಕತೆವಿರುವೆಡೆಯಲ್ಲಿ ಪರಿವರ್ತಕಗಳನ್ನು ಅಳವಡಿಸಲು ರೈತರಿಂದ ಯಾವುದೇ ಶುಲ್ಕವನ್ನು ವಿದ್ಯುತ್ ಸರಬರಾಜು ಕಂಪನಿಗಳು ತೆಗೆದುಕೊಳ್ಳುತ್ತಿರುವುದಿಲ್ಲ.<br><br>2019-20 ರಿಂದ 2021-22ರ ಫೆಬ್ರುವರಿ 22ರ ಅಂತ್ಯಕ್ಕೆ ಇರುವಂತೆ ಅಕ್ರಮ ಸಕ್ರಮ/ ಇತರೆ ನೀರಾವರಿ ಪಂಪ್ ಸೆಟ್ ಗಳಿಗೆ ವಿದ್ಯುತ್ ಸಂಪರ್ಕ ಕಲ್ಪಿಸಲು ಬಂದಿರುವ ಅರ್ಜಿಗಳ ಸಂಖ್ಯೆ ಸಕ್ರಮೀಕರಣ/ಮೂಲಭೂತ ಸೌಕರ್ಯ ಕಲ್ಪಿಸಲು ಪಾವತಿಸಿರುವ ಶುಲ್ಕ ಮತ್ತು ಅವಶ್ಯಕತೆವಿರುವೆಡೆಯಲ್ಲಿ ಅಳವಡಿಸಲಾದ ಪರಿವರ್ತಕಗಳ ಸಂಖ್ಯೆಯ ಜಿಲ್ಲಾವಾರು ವಿವರಗಳನ್ನು ಅನುಬಂಧದಲ್ಲಿ ಲಗತ್ತಿಸಲಾಗಿದೆ. |
| ಆ) | ಬಂದ ಅರ್ಜಿಗಳಲ್ಲಿ ಕಳೆದ ಎರಡು ವರ್ಷದಲ್ಲಿ ಎಷ್ಟು ಜನ ರೈತರಿಗೆ ವಿದ್ಯುತ್ ಟ್ರಾನ್ಸ್‌ಫಾರ್ಮರ್‌ಗಳನ್ನು ಅಳವಡಿಸಿ ಕೊಡಲಾಗಿದೆ; | |
| ಇ) | ಇಷ್ಟೊಂದು ಹಣವನ್ನು ಪಾವತಿ ಮಾಡಿ ರೈತರು ವಿದ್ಯುತ್ ಟ್ರಾನ್ಸ್‌ಫಾರ್ಮರ್‌ಗೆ ಕಾಯುತ್ತಿದ್ದರೂ ಸಹ ಎಷ್ಟು ವರ್ಷ ಕಳೆದರೂ ಸರಬರಾಜು ಮಾಡದಿದ್ದ ಮೇಲೆ ಮುಂಚಿತವಾಗಿ ಹಣ ಪಾವತಿ ಮಾಡಿಸಿಕೊಳ್ಳುವುದು ಉಚಿತವೇ; ಇದರ ಬದಲು ಅರ್ಜಿಗಳ ಹಿರಿತನದ ಮೇಲೆ ಟ್ರಾನ್ಸ್‌ಫಾರ್ಮರ್ ನೀಡುವಾಗ ಹಣ ಪಾವತಿಸಿಕೊಳ್ಳಲು ರೈತರ ಅನುಕೂಲಕ್ಕಾಗಿ ಈ ವ್ಯವಸ್ಥೆ ಬದಲಾವಣೆ ಮಾಡಲು ಸರ್ಕಾರ ತೀರ್ಮಾನ ತೆಗೆದುಕೊಳ್ಳುವುದೇ? | |

| | | |
|---|---|---|
| ಈ) | ಐದು ವರ್ಷ ಕಳೆದರೂ ಸಹ ವಿದ್ಯುತ್ ಟ್ರಾನ್ಸ್‌ಫಾರ್ಮರ್ ಸರಬರಾಜು ಮಾಡಲು ಸಾಧ್ಯವಾಗದಿದ್ದಾಗ ಮತ್ತು ರೈತರಿಗೆ ಅನುಕೂಲ ಮಾಡುವ ಸಲುವಾಗಿ ಇವುಗಳನ್ನು ಖಾಸಗಿಯವರಿಂದ ನೇರವಾಗಿ ರೈತರೇ ಖರೀದಿ ಮಾಡಿ ಅಳವಡಿಸಿಕೊಳ್ಳಲು ಸರ್ಕಾರಕ್ಕೆ ಅನುಮತಿ ನೀಡಲು ತೊಂದರೆ ಏನು; ಈ ಬಗ್ಗೆ ಸರ್ಕಾರ ಸ್ಪಷ್ಟ ಉತ್ತರ ನೀಡುವುದು? | ರೈತರಿಂದ ಮೂಲಭೂತ ಸೌಕರ್ಯವನ್ನು ಕಲ್ಪಿಸಲು ಶುಲ್ಕವನ್ನು ಪಾವತಿಸಿಕೊಂಡ ಕೂಡಲೇ ತಾಂತ್ರಿಕ ಸಾಧ್ಯತೆ ಇರುವಲ್ಲಿ ಹಾಲಿ ಇರುವ ಮೂಲಭೂತ ಸೌಕರ್ಯವನ್ನು ಬಳಸಿಕೊಂಡು ಸರ್ವೀಸ್ ಮೈನ್ ಮುಖಾಂತರ ವಿದ್ಯುತ್ ಸಂಪರ್ಕ ನೀಡಲಾಗಿರುತ್ತದೆ.<br>ಉಳಿದಂತೆ ಮಾರ್ಗ ವಿಸ್ತರಣೆ ಅವಶ್ಯವಿರುವ ಪಂಪ್‌ಸೆಟ್‌ಗಳಿಗೆ ಟೆಂಡರ್ ಪ್ರಕ್ರಿಯೆ ನಡೆಸಿ ಗುತ್ತಿಗೆ ಆಧಾರದಲ್ಲಿ ಕಾಮಗಾರಿಯನ್ನು ಕೈಗೊಂಡು ಮೂಲಭೂತ ಸೌಕರ್ಯವನ್ನು ಒದಗಿಸಿ ವಿದ್ಯುತ್ ಸಂಪರ್ಕ ಕಲ್ಪಿಸಲಾಗುತ್ತಿದೆ. ಇದೊಂದು ನಿರಂತರ ಪ್ರಕ್ರಿಯೆಯಾಗಿರುತ್ತದೆ. |
| ಉ) | ಈಗಾಗಲೇ ವಿದ್ಯುತ್ ಕಂಬಗಳು ವಿದ್ಯುತ್ ತಂತಿಗಳನ್ನು ಇತರ ವಿದ್ಯುತ್ ಪರಿಕರಗಳನ್ನು ಬಡಾವಣೆಗಳಿಗೆ / ಗ್ರಾಮಗಳಿಗೆ ನಗರಗಳಲ್ಲಿ ಖಾಸಗಿಯವರೇ ಅಳವಡಿಸುತ್ತಿರುವುದರಿಂದ ಈ ವಿದ್ಯುತ್ [illegible] ಟ್ರಾನ್ಸ್‌ಫಾರ್ಮರ್‌ಗಳನ್ನು ಸಹ ಖಾಸಗಿಯವರಿಂದ ಖರೀದಿಸಿ ಅಳವಡಿಸಿಕೊಳ್ಳಲು ಸರ್ಕಾರ ಕೂಡಲೇ [illegible] ಆದೇಶ ಹೊರಡಿಸಲಾಗುವುದೇ? | ಪ್ರಸ್ತುತ ಈ ರೀತಿಯ ಪ್ರಸ್ತಾವನೆ ಸರ್ಕಾರದ ಮುಂದಿರುವುದಿಲ್ಲ. |

ಸಂಖ್ಯೆ: ಇಎನ್ 69 ಇಬಿಎಸ್ 2022

(ವಿ. ಸುನಿಲ್ ಕುಮಾರ್)
ಇಂಧನ ಹಾಗೂ ಕನ್ನಡ ಮತ್ತು ಸಂಸ್ಕೃತಿ ಸಚಿವರು

## ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 1728ಕ್ಕೆ ಅನುಬಂಧ:-

**2019-20 ರಿಂದ 2021-22ನೇ ಸಾಲಿನ ಫೆಬ್ರುವರಿ 22ರ ಅಂತ್ಯಕ್ಕೆ ಅಕ್ರಮ ಸಕ್ರಮ/ಇತರೆ ಅರ್ಜಿಗಳಿಗೆ ವಿದ್ಯುತ್ ಸಂಪರ್ಕ ಕಲ್ಪಿಸಲು ಬಂದಿರುವ ಅರ್ಜಿಗಳ ಸಂಖ್ಯೆ, ಮೂಲಭೂತ ಸೌಕರ್ಯ ಕಲ್ಪಿಸಲು ಪಾವತಿಸಿರುವ ಶುಲ್ಕ ಮತ್ತು ಅವಶ್ಯವಿರುವೆಡೆ ಅಳವಡಿಸಲಾದ ಪರಿವರ್ತಕಗಳ ಸಂಖ್ಯೆಯ ಜಿಲ್ಲಾವಾರು ವಿವರಗಳು:-**

| ಕ್ರ. ಸಂ. | ಜಿಲ್ಲೆ | ಮಾರ್ಚ್ 2019ರ ಅಂತ್ಯಕ್ಕೆ ಮೂಲಭೂತ ಸೌಕರ್ಯ ಕಲ್ಪಿಸಲು ಬಾಕಿ ಇರುವ ಅರ್ಜಿಗಳ ಸಂಖ್ಯೆ | ವಿದ್ಯುತ್ ಸಂಪರ್ಕ ಕೋರಿ ರೈತರಿಂದ ಬಂದಿರುವ ಅರ್ಜಿಗಳ ಸಂಖ್ಯೆ | ವಿದ್ಯುತ್ ಸಂಪರ್ಕಕ್ಕಾಗಿ ರೈತರು ರೂ.10000/- ಮತ್ತು ಇತರೆ ಠೇವಣಿ ಶುಲ್ಕಗಳನ್ನು ಪಾವತಿ ಮಾಡಿರುವ ಅರ್ಜಿಗಳ ಸಂಖ್ಯೆ | ಮೂಲಭೂತ ಸೌಕರ್ಯ ಕಲ್ಪಿಸಲಾಗಿರುವ ಅರ್ಜಿಗಳ ಸಂಖ್ಯೆ | ಅವಶ್ಯವಿರುವೆಡೆಯಲ್ಲಿ ಅಳವಡಿಸಲಾದ ಪರಿವರ್ತಕಗಳ ಸಂಖ್ಯೆ | ಮೂಲಭೂತ ಸೌಕರ್ಯ ಕಲ್ಪಿಸಲು ಬಾಕಿ ಇರುವ ಅರ್ಜಿಗಳ ಸಂಖ್ಯೆ |
|---|---|---|---|---|---|---|---|
| | **ಬೆಸ್ಕಾಂ** | | | | | | |
| 1 | ತುಮಕೂರು | 8014 | 22506 | 22506 | 18850 | 18491 | 11670 |
| 2 | ರಾಮನಗರ | 4403 | 6308 | 6308 | 5168 | 4910 | 5543 |
| 3 | ಕೋಲಾರ | 283 | 3440 | 3440 | 2547 | 2547 | 1176 |
| 4 | ಚಿಕ್ಕಬಳ್ಳಾಪುರ | 1625 | 3534 | 4484 | 3505 | 3505 | 1654 |
| 5 | ದಾವಣಗೆರೆ | 15958 | 16340 | 16340 | 13598 | 6871 | 18700 |
| 6 | ಚಿತ್ರದುರ್ಗ | 6416 | 14281 | 14281 | 12317 | 9565 | 8380 |
| 7 | ಬೆಂಗಳೂರು ಗ್ರಾಮಾಂತರ | 1988 | 3120 | 3083 | 3436 | 2862 | 1672 |
| 8 | ಬೆಂಗಳೂರು ನಗರ | 296 | 425 | 559 | 605 | 465 | 116 |
| **ಒಟ್ಟು** | | **38983** | **69954** | **71001** | **60026** | **49216** | **48911** |

| ಕ್ರ. ಸಂ. | ಜಿಲ್ಲೆ | ಮಾರ್ಚ್ 2019ರ ಅಂತ್ಯಕ್ಕೆ ಮೂಲಭೂತ ಸೌಕರ್ಯ ಕಲ್ಪಿಸಲು ಬಾಕಿ ಇರುವ ಅರ್ಜಿಗಳ ಸಂಖ್ಯೆ | ವಿದ್ಯುತ್ ಸಂಪರ್ಕ ಕೋರಿ ರೈತರಿಂದ ಬಂದಿರುವ ಅರ್ಜಿಗಳ ಸಂಖ್ಯೆ | ವಿದ್ಯುತ್ ಸಂಪರ್ಕಕ್ಕಾಗಿ ರೈತರು ರೂ.10000/- ಮತ್ತು ಇತರೆ ಠೇವಣಿ ಶುಲ್ಕಗಳನ್ನು ಪಾವತಿ ಮಾಡಿರುವ ಅರ್ಜಿಗಳ ಸಂಖ್ಯೆ | ಮೂಲಭೂತ ಸೌಕರ್ಯ ಕಲ್ಪಿಸಲಾಗಿರುವ ಅರ್ಜಿಗಳ ಸಂಖ್ಯೆ | ಅವಶ್ಯವಿರುವೆಡೆಯಲ್ಲಿ ಅಳವಡಿಸಲಾದ ಪರಿವರ್ತಕಗಳ ಸಂಖ್ಯೆ | ಮೂಲಭೂತ ಸೌಕರ್ಯ ಕಲ್ಪಿಸಲು ಬಾಕಿ ಇರುವ ಅರ್ಜಿಗಳ ಸಂಖ್ಯೆ |
|---|---|---|---|---|---|---|---|
| | **ಮೆಸ್ಕಾಂ** | | | | | | |
| 1 | ದಕ್ಷಿಣ ಕನ್ನಡ | 673 | 14887 | 13706 | 13602 | 222 | 777 |
| 2 | ಉಡುಪಿ | 201 | 8019 | 7698 | 7546 | 109 | 353 |
| 3 | ಶಿವಮೊಗ್ಗ | 4834 | 11631 | 9612 | 9062 | 3392 | 5384 |
| 4 | ಚಿಕ್ಕಮಗಳೂರು | 5515 | 13368 | 11880 | 8156 | 3974 | 9239 |
| | ಒಟ್ಟು | **11223** | **47905** | **42896** | **38366** | **7697** | **15753** |
| | **ಸೆಸ್ಕ್** | | | | | | |
| 1 | ಮೈಸೂರು | 5955 | 13752 | 13752 | 15665 | 1498 | 4042 |
| 2 | ಚಾಮರಾಜನಗರ | 2063 | 3536 | 3536 | 3365 | 2087 | 2234 |
| 3 | ಕೊಡಗು | 0 | 0 | 0 | 0 | 82 | 0 |
| 4 | ಮಂಡ್ಯ | 8144 | 10680 | 10680 | 11961 | 4849 | 6863 |
| 5 | ಹಾಸನ | 8846 | 22874 | 22874 | 20740 | 5896 | 10980 |
| | ಒಟ್ಟು | **25008** | **50842** | **50842** | **51731** | **14412** | **24119** |

| ಕ್ರ. ಸಂ. | ಜಿಲ್ಲೆ | ಮಾರ್ಚ್ 2019ರ ಅಂತ್ಯಕ್ಕೆ ಮೂಲಭೂತ ಸೌಕರ್ಯ ಕಲ್ಪಿಸಲು ಬಾಕಿ ಇರುವ ಅರ್ಜಿಗಳ ಸಂಖ್ಯೆ | ವಿದ್ಯುತ್ ಸಂಪರ್ಕ ಕೋರಿ ರೈತರಿಂದ ಬಂದಿರುವ ಅರ್ಜಿಗಳ ಸಂಖ್ಯೆ | ವಿದ್ಯುತ್ ಸಂಪರ್ಕಕ್ಕಾಗಿ ರೈತರು ರೂ.10000/- ಮತ್ತು ಇತರೆ ಠೇವಣಿ ಶುಲ್ಕಗಳನ್ನು ಪಾವತಿ ಮಾಡಿರುವ ಅರ್ಜಿಗಳ ಸಂಖ್ಯೆ | ಮೂಲಭೂತ ಸೌಕರ್ಯ ಕಲ್ಪಿಸಲಾಗಿರುವ ಅರ್ಜಿಗಳ ಸಂಖ್ಯೆ | ಅವಶ್ಯವಿರುವೆಡೆಯಲ್ಲಿ ಅಳವಡಿಸಲಾದ ಪರಿವರ್ತಕಗಳ ಸಂಖ್ಯೆ | ಮೂಲಭೂತ ಸೌಕರ್ಯ ಕಲ್ಪಿಸಲು ಬಾಕಿ ಇರುವ ಅರ್ಜಿಗಳ ಸಂಖ್ಯೆ |
|---|---|---|---|---|---|---|---|
| | **ಹೆಸ್ಕಾಂ** | | | | | | |
| 1 | ಧಾರವಾಡ | 2599 | 7012 | 1478 | 2905 | 379 | 1172 |
| 2 | ಗದಗ | 1953 | 9155 | 1280 | 1900 | 2616 | 1333 |
| 3 | ಹಾವೇರಿ | 6260 | 26991 | 5783 | 6806 | 3572 | 5237 |
| 4 | ಉತ್ತರ ಕನ್ನಡ | 4744 | 7342 | 7697 | 8054 | 306 | 4387 |
| 5 | ಬೆಳಗಾವಿ | 9101 | 80157 | 14853 | 13906 | 7237 | 10048 |
| 6 | ವಿಜಯಪುರ | 4479 | 73834 | 6683 | 5403 | 1160 | 5759 |
| 7 | ಬಾಗಲಕೋಟೆ | 1209 | 38234 | 1985 | 967 | 982 | 2227 |
| | **ಒಟ್ಟು ಹೆಸ್ಕಾಂ** | **30345** | **242725** | **39759** | **39941** | **16252** | **30163** |
| | **ಜೆಸ್ಕಾಂ** | | | | | | |
| 1 | ಕಲಬುರಗಿ | 131 | 639 | 723 | 701 | 145 | 22 |
| 2 | ಯಾದಗಿರ | 0 | 525 | 482 | 323 | 34 | 159 |
| 3 | ಬೀದರ | 0 | 189 | 160 | 87 | 0 | 73 |
| 4 | ರಾಯಚೂರು | 2 | 385 | 282 | 268 | 193 | 14 |
| 5 | ಕೊಪ್ಪಳ | 42 | 216 | 199 | 157 | 84 | 42 |
| 6 | ಬಳ್ಳಾರಿ | 93 | 755 | 640 | 245 | 173 | 395 |
| | ಒಟ್ಟು | **268** | **2709** | **2486** | **1781** | **629** | **705** |